ಒಂದಾಣೆ ಮಾಲೆ 185

# ಭರ್ತೃಹರಿಯ ನೀತಿಶತಕ

## (ತೃತೀಯ ಭಾಗ)

ಮೂಲಶ್ಲೋಕಗಳು ಮತ್ತು ತಾತ್ಪರ್ಯಸಹಿತ.



ಅನುವಾದಕರು:
**ರಸಿಕ, ಪುತ್ತಿಗೆ.**



ಬೆಲೆ: ಒಂದಾಣೆ.

ಒಂದಾಣೆ ಮಾಲೆ, ಮಂಗಳೂರು.

# ಭರ್ತೃಹರಿಯ ನೀತಿಶತಕ

(ಕನ್ನಡ ತಾತ್ಪರ್ಯ ಸಹಿತ)



ಎಲ್ಲರಿಗೂ ಸಂಗ್ರಹಿಸಲನುಕೂಲವಾಗುವಂತೆ 'ಒಂದಾಣೆಮಾಲೆ'ಯ 183, 184 ಮತ್ತು 185ನೇ ಪುಸ್ತಕಗಳಾಗಿ ಪ್ರಕಟವಾಗಿವೆ.

ಈ 185ನೇ ಪುಸ್ತಕ ಕೊಂಡುಕೊಳ್ಳುವಾಗ, ಇದರ ಪ್ರಥಮ ಭಾಗ ಸಂಬ್ರ 183 ಮತ್ತು ದ್ವಿತೀಯ ಭಾಗ ಸಂಬ್ರ 184ನ್ನೂ ಕೊಂಡುಕೊಳ್ಳಿರಿ.



**ಪ್ರತಿಯೊಂದಕ್ಕೆ ಬೆಲೆ ಒಂದಾಣೆ.**

ಎಲ್ಲ ಪುಸ್ತಕ ವ್ಯಾಪಾರಿಗಳಲ್ಲೂ ನ್ಯೂಸ್ ಏಜಂಟರಲ್ಲೂ ದೊರೆವುದು.

ಅಥವಾ

ಒಂದಾಣೆಮಾಲೆ,

ಪ್ರಭಾತ ಆಫೀಸು, ರಥಬೀದಿ, ಮಂಗಳೂರು-1.

# ಭರ್ತೃಹರಿಯ ನೀತಿಶತಕ

## (ತೃತೀಯ ಭಾಗ)

---

### ಪರೋಪಕಾರ ಪದ್ಧತಿ

ಶ್ಲೋ: ಭವಂತಿನವ್ರಾಃ ತರವಃ ಫಲೋದ್ಗಮೈಃ ನವಾಂಬುಭಿ ರ್ದೂರವಿಲಂಬಿನೋಘನಾಃ । ಅನುದ್ಧತಾಃ ಸತ್ಪುರುಷಾಃ ಸಮೃದ್ಧಿಭಿಃ ಸ್ವಭಾವವನ್ಯೈಷ ಪರೋಪಕಾರಿಣಂ ॥ ೬೨ ॥

ತಾ: ಮಾವು ಮೊದಲಾದ ಫಲವೃಕ್ಷಗಳು ಫಲಭಾರದಿಂದ ಬಾಗುತ್ತವೆ. ನೀರು ತುಂಬಿದ ಮೋಡಗಳು ನೀರನ್ನು ವರ್ಷಿಸುವ ಸಲುವಾಗಿ ತಗ್ಗುತ್ತವೆ. ಸಜ್ಜನರು ಧನ ಬಂದರೂ ಕೂಡಾ ಅನಹಂಕಾರಿಗಳಾಗುವರು. ಅಂದರೆ ಈ ಗುಣಗಳು ಪರೋಪಕಾರ ಬುದ್ಧಿಯುಳ್ಳವರಿಗೆ ಸ್ವಭಾವವಾದವುಗಳು.

ಶ್ಲೋ: ಶ್ರೋತ್ರಂಶ್ರುತೇನೈವ ನ ಕುಂಡಲೇನ ದಾನೇನಪಾಣಿಃ ನತು ಕಂಕಣೇನ । ವಿಭಾತಿಕಾಯಃ ಕರುಣಾಕುಲಾನಾಂ ಪರೋಪಕಾರೇಣ ನ ಚಂದನೇನ ॥ ೬೩ ॥

ತಾ: ಕಿವಿಯು ಧರ್ಮಶಾಸ್ತ್ರಶ್ರವಣದಿಂದ ಪ್ರಕಾಶಿಸುವುದು, ಕುಂಡಲದಿಂದಲ್ಲ; ದಾನಮಾಡುವುದರಿಂದಲ್ಲದೆ ಕಂಕಣದಿಂದ ಕೈಯು ಶೋಭಿಸಲಾರದು. ಶರೀರವು ಪರೋಪಕಾರದಿಂದಲೇ ಶೋಭಿಸುವುದಲ್ಲದೆ ಚಂದನಾದಿ ಸುಗಂಧ ದ್ರವ್ಯಗಳಿಂದಲ್ಲ.

ಶ್ಲೋ: ಪದ್ಮಾಕರಂ ದಿನಕರೋ ವಿಕಚಂಕರೋತಿ ಚಂದ್ರೋ ವಿಕಾಸಯತಿ ಕೈರವ ಚಕ್ರವಾಲಂ । ನಾಭ್ಯರ್ಥಿತೋ ಜಲಧರೋಪಿ ಜಲಂದಧಾತಿ ಸಂತಸ್ಸ್ವಯಂ ಪರಹಿತೇ ವಿಹಿತಾಭಿ ಯೋಗಾಂ । ೬೪ ॥

ತಾ: ಕಮಲಗಳು ಕೇಳಿಕೊಳ್ಳದೇನೇ ಸೂರ್ಯನು ಹೇಗೆ ಅವುಗಳನ್ನು ಅರಳಿಸುವನೋ, ಚಂದ್ರನು ಕುಮುದಗಳು ಬೇಡಿಕೊಳ್ಳದಿದ್ದರೂ

ಆವುಗಳನ್ನು ಹೇಗೆ ವಿಕಸಿಸುವನೋ, ಮೇಘವು ಹೇಗೆ ಅಯಾಚಿತವಾಗಿಯೇ ನೀರನ್ನು ಸುರಿಸುವುದೋ, ಅಂತೇ ಸುಜನರು ಯಾರೂ ಕೇಳದೆನೇ ಪರೋಪಕಾರ ಮಾಡುವರು.

ಶ್ಲೋ: ಏತೇಸತ್‌ಪುರುಷಾಃ ಪರಾರ್ಥ ಘಟಕಾಃ ಸ್ವಾರ್ಥಾನ್ ಪರಿತ್ಯಜ್ಯಯೇ ಸಾಮಾನ್ಯಾಸ್ತು ಪರಾರ್ಥಮುದ್ಯಮ ಭೃತಃ ಸ್ವಾರ್ಥಾವಿರೋಧೇನಯೇ । ತೇಮೀ ಮಾನುಷ ರಾಕ್ಷಸಾಃ ಪರಹಿತಂ ಸ್ವಾರ್ಥಾಯ ನಿಘ್ನಂತಿಯೇ ಯೇತುಘ್ನಂತಿನಿರರ್ಥಕಂ ಪರಹಿತಂತೇಕೇ ನಜಾನೀಮಹೇ ॥ ೬೫ ॥

ತಾ: ಸ್ವಪ್ರಯೋಜನವನ್ನು ತೊರೆದು ಇತರರ ಹಿತಕ್ಕಾಗಿ ದುಡಿಯುವವರು ಉತ್ತಮರೆಂತಲೂ ತಮ್ಮ ಹಿತವನ್ನು ಸಾಧಿಸುತ್ತಾ ಇತರರ ಹಿತವನ್ನೂ ಬಯಸುವವರು ಮಧ್ಯಮರೆಂತಲೂ ತಮ್ಮ ಹಿತಕ್ಕೋಸ್ಕರ ಬೇರೆಯವರಿಗೆ ಅಹಿತವನ್ನುಂಟುಮಾಡುವವರು ಮನುಷ್ಯರೂಪದ ರಾಕ್ಷಸರೆಂತಲೂ, ತಮ್ಮ ಪ್ರಯೋಜನವನ್ನು ನಾಶಮಾಡಿಕೊಳ್ಳುವುದರ ಜೊತೆಗೆ ಇತರರ ಹಿತವನ್ನೂ ಹಾಳುಮಾಡುವವರು ಏನೆಂದು ಕರೆಸಿಕೊಳ್ಳಲೂ ಅಯೋಗ್ಯರು ಎಂತಲೂ ಆಗಿರುತ್ತಾರೆ. ಆದುದರಿಂದ ಮನುಷ್ಯನು ಉತ್ತಮನಾಗಬೇಕು. ಸಾಧ್ಯವಾಗದಿದ್ದರೆ ಮಧ್ಯಮನಾದರೂ ಆಗಬೇಕು.

ಶ್ಲೋ: ಪಾಪಾನ್ನಿವಾರಯತಿ ಯೋಜಯತೇ ಹಿತಾಯ ಗುಹ್ಯಂನಿಗೂಹಯತಿ ಗುಣಾನ್ ಪ್ರಕಟೀಕರೋತಿ । ಆಪದ್ಗತಂ ಚ ನಜಹಾತಿದದಾತಿಕಾಲೇ ಸನ್ಮಿತ್ರಲಕ್ಷಣಮಿದಂ ಪ್ರವದಂತಿಸಂತಃ ॥ ೬೬ ॥

ತಾ: ಹಿತೋಪದೇಶದಿಂದ ಪಾಪ ವಿಮುಖನಾಗಿಸುವವನೂ, ಸತ್ಕರ್ಮಾಚರಣೆಗೆ ಪ್ರೋತ್ಸಾಹ ಕೊಡುವವನೂ, ರಹಸ್ಯವನ್ನು ಮರೆಮಾಡುತ್ತಲೂ, ಗುಣಗಳನ್ನು ಮರೆಮಾಡದೆ ಪ್ರಕಟಿಸುತ್ತಲೂ, ಆಪತ್ಕಾಲದಲ್ಲೂ ತೊರೆದು ಹೋಗದಿರುವವನೂ, ದಾರಿದ್ರ್ಯಕಾಲದಲ್ಲಿ ಬೇಕಾದ್ದನ್ನು ಕೊಟ್ಟು ಸಂತೈಸುವವನೂ,— ಮೊದಲಾದ ಗುಣಗಳುಳ್ಳವನೇ ಉತ್ತಮ ಮಿತ್ರನೆಂದು ತಿಳಿದವರು ಹೇಳುತ್ತಾರೆ.

ಶ್ಲೋ: ಕ್ಷೀರೇಣಾತ್ಮಗತೋದಕಾಯಹಿಗುಣಾದತ್ತಾಃ ಪುರಾತೇಖಿಲಾಃ ಕ್ಷೀರೋತ್ತಾಪಮವೇಕ್ಷ್ಯತೇನಪಯಸಾ ಸ್ವಾತ್ಮಾಕೃಶಾನೌಹುತಃ । ಗಂತುಂ

ಪಾವಕಮುನ್ಮನಸ್ತದಭವದ್ದೃಷ್ಟ್ವಾತು ಮಿತ್ರಾಪದಂಯುಕ್ತಂತೇನ ಜಲೇನ ಶಾಮ್ಯತಿಸತಾಂ ಮೈತ್ರೀಪುನಸ್ತ್ವೀದೃಶೀ ॥ ೬೭ ॥

ತಾ: ಹಾಲು ತನ್ನನ್ನು ಬೆರಸಿಬಂದ ನೀರಿಗೆ ತನ್ನ ರೂಪವನ್ನೂ ರುಚಿಯನ್ನೂ ಕೊಡುವುದು. ಅನಂತರ ಒಲೆಯ ಮೇಲೆ ಆ ಹಾಲನ್ನು ಕಾಯಿಸುವಾಗ ತನ್ನ ಮಿತ್ರನಿಗೆ ಆಪತ್ತು ಬಂತೆಂದು ತಿಳಿದು ನೀರು ತನ್ನ ದೇಹವನ್ನು ಅಗ್ನಿಗೆ ಅರ್ಪಿಸುವುದು. ನಂತರ ಹಾಲು ತನ್ನ ಮಿತ್ರನಾದ ನೀರು ತನಗೋಸ್ಕರ ಅಗ್ನಿಪ್ರವೇಶ ಮಾಡಿತೆಂದರಿತು ತಾನು ಇನ್ನಿರಬಾರದೆಂದು ಬೆಂಕಿಗೆ ಬೀಳಲು ಮೇಲೆ ಬರುವುದು. ಆಗ ನೀರನ್ನು ಹಾಕಿದರೆ, ತನ್ನ ಮಿತ್ರನು ಬಂದನೆಂದು ಹಾಲು ಸಂತಸಪಡುವುದು. ಹೀಗೆ ಉತ್ತಮ ಮಿತ್ರರು ಆಪತ್ಕಾಲದಲ್ಲಿ ಪರಸ್ಪರ ಉಪಕಾರಿಗಳಾಗುವರು.

ಶ್ಲೋ: ಇತಃ ಸ್ವಪಿತಿ ಕೇಶವಃ ಕುಲಮಿತಸ್ತದೀಯದ್ವಿಷಾಮಿ ತಶ್ಚ ಶರಣಾರ್ಥಿನಾಂ ಶಿಖರಿಣಾಂಗಣಾಶ್ಶೇರತೆ । ಇತೋಽಪಿಬಡಬಾನಲಃ ಸಹಸ್ರಮಸ್ತಸಂವರಕೈಃ ಅಹೋ ವಿತತ ಮೂರ್ಜತಂಭರಸಹಂಚಸಿಂಧೋರ್ವಪುಃ ॥ ೬೮ ॥

ತಾ: (ಸಮುದ್ರದ ಮಹಾತ್ಮೆಯನ್ನು ಹೇಳುತ್ತಾನೆ.) ಈ ಪ್ರದೇಶದಲ್ಲಿ ವಿಷ್ಣುವು ನಿದ್ದೆ ಹೋಗುತ್ತಾನೆ. ಒಂದು ಕಡೆ ವಿಷ್ಣು ಸಂಬಂಧಿಗಳಾದ ದೇವತೆಗಳ ಶತ್ರುಗಳು ಇದ್ದಾರೆ. ಇನ್ನೊಂದು ಕಡೆ ಶರಣಾರ್ಥಿಗಳಾಗಿ ಬಂದ ಮೈನಾಕವೇ ಮೊದಲಾದ ಪರ್ವತಗಳಿವೆ. ಬೇರೊಂದು ಕಡೆಯಲ್ಲಿ ಬಡಬಾನಲನು ಅನೇಕ ಮೇಘಗಳಿಂದ ಕೂಡಿಕೊಂಡಿದ್ದಾನೆ. ಇವುಗಳನ್ನೆಲ್ಲಾ ಕೂಡಿಕೊಂಡಿದ್ದರೂ ಸಮುದ್ರದ ಶರೀರವು ವಿಸ್ತಾರವಾಹುದೂ, ವೃದ್ಧಿಪೂರ್ಣವೂ ಭಾರವಹನ ಶಕ್ತಿಯುಳ್ಳದ್ದೂ ಆದುದರಿಂದ ಮಹದಾಶ್ಚರ್ಯಕರವೆಂದು ಅರ್ಥವು.

ಶ್ಲೋ: ಜಾತಃಕೂರ್ಮಃ ಸಏಕಃ ಪೃಥುಭುವನಭರಾಯಾರ್ಪಿತಂಯೇನ ಪೃಷ್ಠಂಶ್ಲಾಘ್ಯಂ ಜನ್ಮಧ್ರುವಸ್ಯ ಭ್ರಮತಿನಿಯಮಿತಂ ಯತ್ರತೇಜಸ್ವಿಚಕ್ರಂ। ಸಂಜಾತವ್ಯರ್ಥಪಕ್ಷಾಃ ಪರಹಿತಕರಣೇನೋ ಪರಿಷ್ಟಾಃ ನಚಾಧೋ ಬ್ರಹ್ಮಾಂಡೋದುಂಬರಾಂತಃ ಮಶಕವದಪರೇಜಂತವೋ ಜಾತನಷ್ಟಾಃ ॥ ೬೯ ॥

ತಾ: (ಪರೋಪಕಾರಿಗಳ ಜನ್ಮವೇ ಸಾರ್ಥಕವೆನ್ನುತ್ತಾನೆ.) ಆದಿ ಕೂರ್ಮನು ಜಗತ್ತಿನ ಭಾರವನ್ನು ಬೆನ್ನಿನಲ್ಲಿ ಹೊತ್ತು ಎಲ್ಲರಿಗಿಂತಲೂ ಕೆಳಗಿದ್ದು ಕೀರ್ತಿಗಳಿಸಿದಂತೆಯಾದರೂ, ಅಥವಾ ಧ್ರುವನಂತೆ ಎಲ್ಲರಿಗಿಂತಲೂ ಮೇಲಕ್ಕಿದ್ದು, ಗ್ರಹನಕ್ಷತ್ರಗಳನ್ನು ನಿಯಮಿಸುವಂತೆ, ಪರೋಪಕಾರವನ್ನು ಮಾಡಿ ಔನ್ನತ್ಯವನ್ನು ಪಡೆಯಬೇಕು. ಈ ಎರಡು ರೀತಿಯಲ್ಲಿಯೂ ಔನ್ನತ್ಯವನ್ನು ಪಡೆಯದಿರುವ ಪ್ರಾಣಿಗಳು ಅತ್ತಿಹಣ್ಣಿನ ಹುಳಗಳಂತೆ ಹುಟ್ಟುವುದು, ಸಾಯುವುದು ನಿಷ್ಪ್ರಯೋಜಕವು.

ಶ್ಲೋ: ತೃಷ್ಣಾಂಛಿಂದಿ ಭಜಕ್ಷಮಾಂಜಹಿಮದಂ ಪಾಪೇರತಿಂಮಾ ಕೃಥಾಃ ಸತ್ಯಂಬ್ರೂಹ್ಯನುಯಾಹಿ ಸಾಧುಪದವೀಂಸೇವಸ್ವವಿದ್ವಜ್ಜನಂ। ಮಾನ್ಯಾನ್ಮಾನಯ ವಿದ್ವಿಷೋಽಪ್ಯನುನಯ ಪ್ರಖ್ಯಾಪಯಪ್ರಶ್ರಯಂ ಕೀರ್ತಿಂ ಪಾಲಯ ದುಃಖಿತೇಕುರುದಯಾಮೇತಃ ಸತಾಂಚೇಷ್ಟಿತಂ ॥ ೭೦ ॥

ತಾ: ಎಲೈ ಮನುಷ್ಯನೇ, ಅಲಭ್ಯ ವಸ್ತುವಿನ ಅತಿಯಾಸೆಯನ್ನು ಕತ್ತರಿಸಿ ಹಾಕು. ಶಾಂತಿಯನ್ನು ಆಶ್ರಯಿಸು. ಅಹಂಕಾರವನ್ನು ಬಿಟ್ಟುಬಿಡು. ಪಾಪದಲ್ಲಿ ಪ್ರೀತಿಯನ್ನಿಡಬೇಡ. ಯಾವಾಗಲೂ ಸತ್ಯವನ್ನೇ ಹೇಳು. ಸಾಧುಜನರ ಮಾರ್ಗವನ್ನು ಅನುಸರಿಸು. ಪಂಡಿತರು, ವಿದ್ವಾಂಸರನ್ನು ಗೌರವಿಸು. ಶತ್ರುಗಳನ್ನು ಕೂಡಾ ಸನ್ಮಾನಿಸು. ನಿನ್ನ ನಮ್ರಭಾವವನ್ನು ಹೆಚ್ಚಿಸು. ಇವುಗಳಿಂದೆಲ್ಲ ಕೀರ್ತಿಯನ್ನು ರಕ್ಷಿಸಿಕೊ. ದುಃಖಿತರಲ್ಲಿ ಕೃಪೆದೋರು—ಇವುಗಳೆಲ್ಲ ಸಜ್ಜನರ ಸ್ವಭಾವಗಳಾಗಿವೆ.

ಶ್ಲೋ: ಮನಸಿ ವಚಸಿಕಾಯೇ ಪುಣ್ಯಪೀಯೂಷಃ ಪೂರ್ಣಾಃ ತ್ರಿಭುವನಮುಪಕಾರ ಶ್ರೇಣಿಭಿಃ ಪ್ರೀಣಯಂತಃ ॥ ಪರಗುಣ ಪರಮಾಣೂನ್ ಪರ್ವತೀಕೃತ್ಯ ನಿತ್ಯಂ ನಿಜಹೃದಿವಿಕಸಂತಃ ಸಂತಿಸಂತಃ ಕಿಯಂತಃ ॥ ೭೧ ॥

ತಾ: ಮನಸಾ ವಾಚಾ ಕಾಯಾ ಎಂಬ ತ್ರಿಕರಣಗಳಲ್ಲಿಯೂ ಪುಣ್ಯವೆಂಬ ಅಮೃತದಿಂದ ತುಂಬಿದ, ಮೂರು ಲೋಕವನ್ನೂ ಹಿತಾಚರಣೆಯಿಂದ ಸಂತೋಷಪಡಿಸುವಂಥ, ಅನ್ಯರ ಅತ್ಯಲ್ಪ ಗುಣಗಳನ್ನೂ ಪರ್ವತೋಪಾದಿಯಲ್ಲಿ ತೋರಿಸಿ, ಸಂತೋಷಪಡುವಂಥ ಸಜ್ಜನರು ಎಷ್ಟು ಜನರಿದ್ದಾರೆ? ಬಹಳ ಕಡಿಮೆ.

## ಧೈರ್ಯ ಪದ್ಧತಿ

ಶ್ಲೋ: ರತ್ನೈಃ ಮಹಾಬ್ಧೇಸ್ತುತುಷುಃ ನ ದೇವಾಃ ನ ಭೇಜಿರೇಭೀಮ ವಿಷೇಣ ಭೀತಿಂ । ಸುಧಾಂವಿನಾನಪ್ರಯಯುಃ ವಿರಾಮಂ ನ ನಿಶ್ಚಿತಿಥಾರ್ಥಿ ದ್ವಿರಮಂತಿ ಧೀರಾಃ ॥ ೭ ॥

ತಾ: ದೇವತೆಗಳು ಸಮುದ್ರಮಥನ ಮಾಡಿ ಸಮುದ್ರ ಸಂಬಂಧಿಗಳಾದ ರತ್ನಹಾರಗಳಿಂದ ತೃಪ್ತಿಹೊಂದಲಿಲ್ಲ. ಭಯಂಕರ ವಿಷದಿಂದಲೂ ಭೀತರಾಗಲಿಲ್ಲ. ಅವರು ಅಮೃತವನ್ನು ಪಡೆಯುವ ವರೆಗೆ ವಿಶ್ರಾಂತಿ ಹೊಂದಲಿಲ್ಲ. ಅಂತೆಯೇ ಧೀರರಾದ ಮನಸ್ವಿಗಳು ನಿಶ್ಚಿತ ಗುರಿಯನ್ನು ತಲಪುವ ತನಕ ವಿರಮಿಸುವುದಿಲ್ಲ.

ಶ್ಲೋ: ಪ್ರಾರಭ್ಯತೇನ ಖಲು ವಿಘ್ನಭಯೇನನೀಚೈಃ ಪ್ರಾರಭ್ಯ ವಿಘ್ನ ನಿಹತಾವಿರಮಂತಿ ಮಧ್ಯಾಃ । ವಿಘ್ನೈಃ ಮುಹುರ್ಮುಹುರಪಿ ಪ್ರತಿಹನ್ಯಮಾನಾಃ ಪ್ರಾರಭ್ಧಮುತ್ತಮ ಗುಣಾನಪರಿತ್ಯಜಂತಿ ॥ ೭೩ ॥

ತಾ: ನೀಚರು ವಿಘ್ನಭಯದಿಂದ ಯಾವ ಕಾರ್ಯವನ್ನೂ ಆರಂಭಿಸುವುದಿಲ್ಲ. ಮಧ್ಯಮರು ಆರಂಭಮಾಡಿದ ಕೆಲಸವನ್ನು ವಿಘ್ನಬಂದಾಗ ಮಧ್ಯದಲ್ಲೇ ಬಿಟ್ಟುಬಿಡುವರು. ಆದರೆ, ಉತ್ತಮರಾದ ವೀರರು ಪ್ರತಿಕ್ಷಣಕ್ಕೂ ವಿಪತ್ತುಗಳಿಂದ ಪೀಡೆಯಾಗುತ್ತಿದ್ದರೂ ಕೈಗೊಂಡ ಕಾರ್ಯವನ್ನು ಬಿಡುವುದಿಲ್ಲ.

ಶ್ಲೋ: ಕ್ವಚಿತ್ ಪೃಥ್ವೀಶಯ್ಯಃ ಕ್ವಚಿದಪಿ ಚ ಪರ್ಯಂಕಶಯನಃ ಕ್ವಚಿತ್ ಶಾಕಾಹಾರಃ ಕ್ವಚಿದಪಿ ಚ ಶಾಲ್ಯೋದನರುಚಿಃ । ಕ್ವಚಿತ್ ಕಂಥಾಧಾರೀ ಕ್ವಚಿದಪಿ ಚ ದಿವ್ಯಾಂಬರ ಧರೋಮನಸ್ವೀ ಕಾರ್ಯಾರ್ಥೀನಗಣಯತಿ ದುಃಖಂ ನ ಚ ಸುಖಂ ॥ ೭೪ ॥

ತಾ: ತನ್ನ ಇಷ್ಟಾರ್ಥಪೂರ್ತಿಗಾಗಿ ಹೋರಾಡುವ ಧೀರನು ಒಂದು ಸಲ ಭೂಶಾಯಿಯಾಗಿದ್ದರೂ, ಮತ್ತೊಮ್ಮೆ ಹಾಸಿಗೆಯಲ್ಲಿ ಪವಡಿಸುತ್ತಿದ್ದರೂ, ಒಂದು ಕಾಲದಲ್ಲಿ ಗೆಡ್ಡೆಗೆಣಸುಗಳನ್ನು ತಿಂದರೂ, ಮತ್ತೊಂದು ಕಡೆ ಮೃಷ್ಟಾನ್ನ ಭೋಜನಮಾಡಿದರೂ, ಒಂದು ಸಮಯದಲ್ಲಿ ಗೋಣಿ ಚೀಲವನ್ನು ಧರಿಸಿದರೂ, ಮತ್ತೊಮ್ಮೆ ಪೀತಾಂಬರವನ್ನು ತೊಟ್ಟುಕೊಂ

ದರೂ, ಇವನ್ನೆಲ್ಲ ದುಃಖಸುಖಗಳೆಂದು ಪರಿಗಣಿಸದೆ ತನ್ನ ಕಾರ್ಯದ ಕಡೆಗೆ ಧೀರತೆಯಿಂದ ಸಾಗುತ್ತ ಇರುವನು.

ಶ್ಲೋ: ನಿಂದಂತುನೀತಿ ನಿಪುಣಾಯದಿವಾಸ್ತುವಂತುಲಕ್ಷ್ಮೀಃ ಸಮಾವಿಶತುಗಚ್ಛತುವಾಯಥೇಷ್ಟಂ । ಅದ್ಯೈವವಾಮರಣಮಸ್ತು ಯುಗಾಂತರೇವಾನ್ಯಾಯಾತ್ಪಥಃ ಪ್ರವಿಚಲಂತಿಪದಂನ ಧೀರಾಃ ॥ ೭೫ ॥

ತಾ: ನೀತಿ ಕುಶಲರಾದವರು ನಿಂದಿಸಿದರೂ ಹೊಗಳಿದರೂ, ಐಶ್ವರ್ಯವು ಬಂದರೂ ಹೋದರೂ, ಮರಣವು ಈಗಲೇ ಬಂದರೂ, ಯಾ ಯುಗಾಂತರದ ನಂತರ ಬರುವದೆಂದಾದರೂ ಸರಿ,—ಧೀರರಾದವರು ನ್ಯಾಯದ ಮಾರ್ಗದಿಂದ ಸ್ವಲ್ಪವೂ ಚಲಿಸಲಾರರು.

ಶ್ಲೋ: ಕಾಂತಾಕಟಾಕ್ಷವಿಶಿಖಾನ ಲುನಂತಿಯಸ್ಯ ಚಿತ್ತಂ ನ ನಿರ್ದಹತಿ ಕೋಪಕೃಶಾನುತಾಪಃ ॥ ತರ್ಷಂತಿ ಭೂರಿವಿಷಯಾಶ್ಚ ನ ಲೋಭಪಾಶಾ ಲೋಕತ್ರಯಂ ಜಯತಿ ಕೃತ್ಸ್ನಮಿದಂಸಧೀರಃ ॥ ೭೬ ॥

ತಾ: ಯಾವ ಗಂಡಸಿನ ಮನಸ್ಸನ್ನು ಹೆಣ್ಣಿನ ಕಡೆಗಣ್ಣಿನ ನೋಟವು ವಿಚಲಿಸುವುದಿಲ್ಲವೊ, ಕೋಪವು ಯಾವನ ಮನಸ್ಸನ್ನು ದಹಿಸುವುದಿಲ್ಲವೊ, ವಿಷಯಾದಿಸುಖಭೋಗದ ಅಭಿಲಾಷೆಯು ಯಾವನನ್ನು ಸೆಳೆದು ಬಂಧಿಸುವುದಿಲ್ಲವೋ ಅಂಥ ಧೀರನು ಮೂರು ಲೋಕಗಳನ್ನೂ ಜಯಿಸುತ್ತಾನೆ.

ಶ್ಲೋ: ಕದರ್ಥಿತಸ್ಯಾಪಿಹಿ ಧೈರ್ಯವೃತ್ತೇಃ ನ ಶಕ್ಯತೇ ಧೈರ್ಯಗುಣಪ್ರಮಾಷ್ಟುಂ । ಅಧೋಮುಖಸ್ಯಾಪಿ ಕೃತಸ್ಯವಹ್ನೇಃ ನಾಧಃ ಶಿಖಾಯಾಂತಿ ಕದಾಚಿದೇವ ॥ ೭೭

ತಾ: ಬೆಂಕಿಯನ್ನು ತಲೆಕೆಳಗಾಗಿ ಹಿಡಿದುಕೊಂಡರೂ ಅದರ ಜ್ವಾಲೆಯು ಎಂದಿಗೂ ಕೆಳಕ್ಕೆ ಹೋಗದೆ ಮೇಲಕ್ಕೇ ಹೋಗುವುದು. ಅಂತೆಯೇ ಧೀರನನ್ನು ಎಷ್ಟೇ ಕುತ್ಸಿತ ಮಾಡಿದಾಗ್ಯೂ ಅವನ ಧೈರ್ಯವೆಂಬ ಗುಣವು ತಿರಸ್ಕೃತವಾಗಲಾರದು.

ಶ್ಲೋ: ವಹ್ನಿಸ್ತಸ್ಯ ಜಲಾಯತೇ ಜಲನಿಧಿಃ ಕುಲ್ಯಾಯತೇ ತತ್‌ಕ್ಷಣಾತ್‌ ಮೇರು ಸ್ವಲ್ಪಶಿಲಾಯತೇ ಮೃಗಪತಿಃ ಸದ್ಯಕುರಂಗಾಯತೇ ।

ವ್ಯಾಳೋವಮಾಲ್ಯ ಗುಣಾಯತೇ ವಿಷರಸಃ ಪೀಯೂಷ ವರ್ಷಾಯತೇ ಯಸ್ಯಾಂಗೇಖಿಲಲೋಕವಲ್ಲಭತರಂ ಶೀಲಂಸಮುನ್ಮೀಲತಿ ॥ ೭೮ ॥

ತಾ: ಶೀಲವಂತನಾದ ಪುರುಷನಿಗೆ ಬೆಂಕಿಯು ನೀರಿನಂತೆ ತಣ್ಣಗಾಗುವುದು, ಸಮುದ್ರವು ಸಣ್ಣ ನದಿಯಂತಾಗುವುದು, ಮೇರು ಪರ್ವತವು ಸಣ್ಣ ಬಂಡೆಯಂತಾಗುವುದು, ಸಿಂಹವು ಕೂಡಲೇ ಜಿಂಕೆಯ ಮರಿಯಂತಾಗುವುದು, ಸರ್ಪವು ಹೂವಿನ ಮಾಲೆಯಂತಾಗುವುದು, ವಿಷವು ಅಮೃತದಂತಾಗುವುದು. ಇಂಥ ಪುರುಷನ ಶರೀರದಲ್ಲಿ ಸಮಸ್ತರಾದ ಜನಗಳಿಗೆ ಪರಮ ಪ್ರೇಮಾಸ್ಪದವಾದ ಶೀಲವು ಪ್ರಕಾಶಿಸುವುದು.

ಶ್ಲೋ: ಛಿನ್ನೋಪಿರೋಹತಿತರುಃ ಕ್ಷೀಣೋಪ್ಯುಪಚೀಯತೇ ಪುನಶ್ಚಂದ್ರಃ । ಇತಿವಿಮೃಶಂತಃ ಸಂತಃ ಸಂತಪ್ಯಂತೇ ನವಿಪ್ಲುಥೇಷು ಲೋಕೇಷು ॥ ೭೯ ॥

ತಾ: ಮರವು ಕತ್ತರಿಸಿದರೂ ಪುನಃ ಚಿಗುರುವುದು, ಚಂದ್ರನು ಒಂದು ಸಲ ಕ್ಷೀಣಿಸಿದರೂ ವೃದ್ಧಿಹೊಂದುವನು ಎಂದು ತಿಳಿದ ವಿಚಾರವಂತ ಪುರುಷರು ತಮ್ಮ ಬಂಧುಜನಗಳು ಕ್ಲೇಶಪಡುತ್ತಿದ್ದಾಗ್ಯೂ ವೃದ್ಧಿಕ್ಷಯಗಳನ್ನಾಲೋಚಿಸಿ ದುಃಖಪಡುವುದಿಲ್ಲ.

ಶ್ಲೋ: ಐಶ್ವರ್ಯಸ್ಯ ವಿಭೂಷಣಂ ಸುಜನತಾ ಶೌರ್ಯಸ್ಯ ವಾಕ್ಸಂಯಮಃ ಜ್ಞಾನಸ್ಯೋಪಶಮಃ ಶ್ರುತಸ್ಯವಿನಯೋವಿತ್ತಸ್ಯ ಪಾತ್ರೇವ್ಯಯಃ ಅಕ್ರೋಧಸ್ತಪಸಃ ಕ್ಷಮಾಪ್ರಭವಿತುಃ ಧರ್ಮಸ್ಯನಿರ್ವ್ಯಾಜತಾ ಸರ್ವೇಷಾಮಪಿ ಸರ್ವಕಾರಣಮಿದಂ ಶೀಲಂ ಪರಂಭೂಷಣಂ ॥ ೮೦ ॥

ತಾ: ಎಲ್ಲಾ ವಸ್ತುಗಳಿಗೂ ಶೀಲವೇ ಭೂಷಣವೆನ್ನುತ್ತಾನೆ. ಐಶ್ವರ್ಯಕ್ಕೆ ಒಳ್ಳೆಯ ಸ್ವಭಾವವು ಭೂಷಣವು. ಪರಾಕ್ರಮಕ್ಕೆ ಸುಮ್ಮನಿರುವುದು ಭೂಷಣವು. ವಿವೇಕಕ್ಕೆ ವೈರಾಗ್ಯವು ಭೂಷಣವು. ಶಾಸ್ತ್ರಕ್ಕೆ ವಿಧೇಯತೆಯೂ, ಹಣಕ್ಕೆ ಉತ್ತಮ ದಾರಿಯಲ್ಲಿ ಖರ್ಚು ಮಾಡುವುದೂ, ತಪಸ್ಸಿಗೆ ಕೋಪವಿಲ್ಲದಿರುವಿಕೆಯೂ, ಸಮರ್ಥನಿಗೆ ಕ್ಷಮೆಯೂ, ಸತ್ಪಾತ್ರದಲ್ಲಿ ದಾನಮಾಡುವಿಕೆಗೆ ಕಾರಣವಿಲ್ಲದಿರುವಿಕೆಯೂ ಭೂಷಣವಾಗಿದೆ.

ಐಶ್ವರ್ಯಾದಿ ಸಮಸ್ತಕ್ಕೂ ಕಾರಣವಾದ ಮೇಲೆ ಹೇಳಿದ ಸದಾಚಾರವು ಎಲ್ಲರಿಗೂ ಸಜ್ಜನತ್ವಕ್ಕಿಂತಲೂ ಉತ್ತಮವಾದ ಭೂಷಣವು.

## ದೈವ ಪದ್ಧತಿ

ಶ್ಲೋ: ನೇತಾಯಸ್ಯ ಬ್ರಹಸ್ಪತಿಃ ಪ್ರಹರಣಂ ವಜ್ರಂ ಸುರಾಸೈನಿಕಾಃ ಸ್ವರ್ಗೋ ದುರ್ಗಮನುಗ್ರಹಃ ಖಲುಹರೇಃ ಐರಾವಣೋ ವಾರಣಃ । ಇತ್ಯಾಶ್ಚರ್ಯ ಬಲಾನ್ವಿತೋ ಪಿ ಬಲಭಿತ್ ಭಗ್ನಃ ಪರೈಃ ಸಂಗರೇ ತದ್ವ್ಯಕ್ತಂ ನನುದೈವಮೇವ ಶರಣಂ ಧಿಕ್ ಧಿಕ್ ವೃಥಾ ಪೌರುಷಂ ॥ ೮೧ ॥

ತಾ: ಯಾವ ಇಂದ್ರನಿಗೆ ಶಿಕ್ಷಕನು ಸುರಾಚಾರ್ಯನಾದ ಗುರುವೋ, ಆಯುಧವು ವಜ್ರಾಯುಧವೋ, ಅಮರರಾದ ದೇವತೆಗಳೇ ಸೈನಿಕರೋ, ಸ್ವರ್ಗಲೋಕವೇ ದುರ್ಗಮ ದುರ್ಗವೋ, ಶ್ರೀಹರಿಯೇ ಪ್ರೀತಿಪಾತ್ರನೋ ಐರಾವತವೇ ವಾಹನವೋ, ಇಂಥ ಇಂದ್ರನು ಅಸಾಧಾರಣ ಬಲದಿಂದ ಕೂಡಿದವನಾದಾಗ್ಯೂ ಯುದ್ಧದಲ್ಲಿ ರಕ್ಕಸರಿಂದ ಸೋಲಿಸಲ್ಪಟ್ಟನು. ಆದುದರಿಂದ ದೈವವೇ ರಕ್ಷಕವಾದುದು, ಇದನ್ನುಳಿದ ಪೌರುಷವು ನಿಂದನೀಯ ಹಾಗೂ ದೈವಬಲವಿಲ್ಲದ ಪೌರುಷಕ್ಕೆ ಧಿಕ್ಕಾರ!

ಶ್ಲೋ: ಭಗ್ನಾಶಸ್ಯ ಕರಂಡಪಿಂಡಿತ ತನೋಃ ಮ್ಲಾನೇಂದ್ರಿಯಸ್ಯ ಕ್ಷುಧಾಕೃತ್ವಾಖುರ್ವಿವರಂ ಸ್ವಯಂನಿಪತಿತೋ ನಕ್ತಂ ಮುಖೇ ಭೋಗಿನಃ ॥ ತೃಪ್ತಃ ತತ್ ಪಿಶಿತೇ ನ ಸತ್ವರಮಸೌ ತೇನೈವ ಯಾತಃ ಪಥಾಸ್ವಸ್ಥಾಶಿಷ್ಠತ ದೈವಮೇವಹಿನೃಣಾಂ ವೃದ್ಧೌ ಕ್ಷಯೇ ಕಾರಣಂ ॥ ೮೨ ॥

ತಾ: ಇಲಿಯು ರಾತ್ರಿಯಲ್ಲಿ ಬಿಲವನ್ನು ಮಾಡಿಕೊಂಡು ಭಗ್ನ ಮನೋರಥವಾಗಿ, ಬುಟ್ಟಿಯಲ್ಲಿ ಹುದುಗಿಸಿಕೊಂಡ ಒಣಕಲು ಶರೀರದ, ಹಸಿದ, ಇಂದ್ರ ಸಾಮರ್ಥ್ಯ ಕುಗ್ಗದ ಹಾವಿನ ಬಾಯಲ್ಲಿ ಬಿದ್ದಿತು. ನಂತರ ಈ ಸರ್ಪವು ಆ ಇಲಿಯ ಮಾಂಸದಿಂದ ಹೊಟ್ಟೆ ತುಂಬಿಸಿಕೊಂಡು ಆ ಇಲಿ ಮಾಡಿದ ಬುಟ್ಟಿಯ ತೂತಿನಿಂದಲೇ ಹೊರಟು ಹೋಯಿತು. ಆದುದರಿಂದ ಜನರೇ, ಸ್ಥಿರಚಿತ್ತರಾಗಿ ಇರಿರಿ. ಅಭಿವೃದ್ಧಿಗೂ ಅವನತಿಗೂ ದೈವವೇ ಎಲ್ಲಕ್ಕಿಂತ ಹೆಚ್ಚಿನ ಕಾರಣವು.

ಶ್ಲೋ: ಯಥಾ ಕಂದುಕ ಪಾತೇನೋತ್ಪತತ್ಯಾರ್ಯಃ ಪತನ್ನಪಿ।
ತಥಾ ತ್ವನಾರ್ಯಃ ಪತತಿ ಮೃತ್ ಪಿಂಡ ಪತನಂ ಯಥಾ ॥ ೮೩ ॥

ತಾ: ದೈವವೇ ಸಕಲ ಹಾನಿ ಲಾಭಗಳಿಗೂ ಕಾರಣವೆಂದರಿತ ಉತ್ತಮನು ಕೆಳಗೆ ಬಿದ್ದರೂ ಚೆಂಡಿನಂತೆ ಪುಟನೆಗೆಯುವನು. ಅಂತೇ ಪೌರುಷ ಬಲದಿಂದ ಮೆರೆಯುವ ಅನಾರ್ಯನು ಮಣ್ಣಿನ ಉಂಡೆ ಬಿದ್ದಂತೆ ಬಿದ್ದಲ್ಲೇ ಇರುವನು.

ಶ್ಲೋ: ಖರ್ವಾಟೋದಿ ಮಸೇಶ್ವರಸ್ಯ ಕಿರಣೈಃ ಸಂತಾಪಿತೇ ಮಸ್ತಕೇ ಗಚ್ಛನ್ ದೇಶ ಮನಾತಪಂ ದ್ರುತಗತಿಃ ತಾಳತ್ಯ ಮೂಲಂಗತಃ ॥ ತತ್ರಾಪ್ಯಸ್ಯ ಮಹಾಫಲೇ ನಪತತಾ ಭಗ್ನಂ ಸಶಬ್ದಂ ಶಿರಃ ಪ್ರಾಯೋಗಚ್ಛತಿ ಯತ್ರ ದೈವ ಹತಕಃ ತತ್ರೈ ವಯಾಂತ್ಯಾ ಪದಃ ॥ ೮೪ ॥

ತಾ: ದೈವವು ಮುನಿದರೆ ಎತ್ತಲೂ ಜಯವಿಲ್ಲವೆಂದು ವಿವರಿಸುತ್ತಾನೆ. ಬೊಕ್ಕ ತಲೆಯುವನು ಸೂರ್ಯನ ತಾಪವನ್ನು ತಾಳಲಾರದೆ ಬಿಸಿಲಿಲ್ಲದಿರುವ ಊರನ್ನು ಕುರಿತು ವೇಗವಾಗಿ ಓಡಿದನು. ಅಲ್ಲಿ ಒಂದು ತಾಳೇ ಮರದ ಬುಡದ ನೆರಳಿನಲ್ಲಿ ನಿಂತನು. ಅಲ್ಲಿಯೂ ಕೂಡಾ ತಾಳೇಮರದ ಭಾರವಾದ ಹಣ್ಣು ಆತನ ತಲೆಗ ಬಿದ್ದು ತಲೆ ಒಡೆಯಿತು. ದೈವಾನುಗ್ರಹ ವಿಲ್ಲದವನು ಎತ್ತ ಸಾಗಿದರೂ ವಿಪತ್ತುಗಳು ಅವನನ್ನು ಅನುಸರಿಸುವವು.

ಶ್ಲೋ: ಗಜಭುಜಂಗ ವಿಹಂಗಮ ಬಂಧನಂ ಶಶಿ ದಿವಾಕರಯೋಃ ಗ್ರಹಣಪೀಡನಂ । ಮತಿಮತಾಂ ಚ ವಿಲೋಕ್ಯ ದರಿದ್ರತಾಂ ವಿಧಿರಹೋ ಬಲವಾನಿತಿ ಮೇಮತಿಃ ॥ ೮೫ ॥

ತಾ: ಸರ್ಪ, ಆನೆ, ಪಕ್ಷಿ ಮೊದಲಾದ ಪ್ರಾಣಿಗಳಿಗೆ ಬಂಧನವೂ, ಸೂರ್ಯ, ಚಂದ್ರರಿಗೆ ರಾಹು ಕೇತುಗಳ ಗ್ರಹಣವೂ, ಕೇವಲ ಬುದ್ಧಿವಂತರಿಗೇ ದಾರಿದ್ರ್ಯವೂ ಬರುವುದನ್ನು ಕಂಡು ಇದನ್ನು ಕಲ್ಪಿಸಿರುವ ವಿಧಿಯನ್ನು ನೆನೆದಾಗ ದೈವವು ಎಲ್ಲಾ ಶಕ್ತಿಗಿಂತಲೂ ಮಿಗಿಲಾದುದು ಎಂದೇ ನನ್ನ ಅಭಿಮತವು — ಎಂದು ಭರ್ತೃಹರಿಯು ಹೇಳುತ್ತಾನೆ.

ಶ್ಲೋ: ಸೃಜತಿ ತಾವದಶೇಷಗುಣಾಕರಂ ಪುರುಷರತ್ನಮಲಂಕರಣಂ ಭುವಃ। ತದಪಿತ ತತ್‌ಕ್ಷಣ ಭಂಗಿಕರೋತಿ ಚೇದಹಹಕಷ್ಟಮ ಪಂಡಿತತಾ ವಿಧೇಃ ॥ ೮೬ ॥

ತಾ: ಬ್ರಹ್ಮನು ಭೂಲೋಕಕ್ಕೆ ಅಲಂಕಾರಪ್ರಾಯನೂ, ಸದ್ಗುಣಗಳ ಖನಿಯೂ ಆದ ಪುರುಷರತ್ನವನ್ನು ಸೃಷ್ಟಿಸಿ ಅಂಥಾ ರತ್ನವನ್ನು ಕೂಡಾ ಕ್ಷಣಮಾತ್ರದಲ್ಲಿ ನಾಶಮಾಡುತ್ತಾನೆ. ಆದುದರಿಂದ ಬ್ರಹ್ಮನ ಪಾಂಡಿತ್ಯವು ನಿಜಕ್ಕೂ ನಿಂದನೀಯವು—ಎನ್ನುತ್ತಾನೆ.

ಶ್ಲೋ: ಅಯಮಮೃತನಿಧಾನಂ ನಾಯಕೋ ಪ್ಯೋಷಧೀನಾಂ ಶತಭಿಷ ಗನುಯಾತಃ ಶಂಭು ಮೂರ್ಧ್ನಾವತಂಸಃ । ವಿರಹಯತಿ ನ ಚೈನ ರಾಜಯಕ್ಷ್ಮಾ ಶಶಾಂಕಂ ಹತವಿಧಿ ಪರಿಪಾಕಃ ಕೇನವಾ ಲಂಘನೀಯಃ ॥ ೮೭ ॥

ತಾ: ಅಮೃತಕ್ಕೆ ಗಣಿಯಾಗಿಯೂ, ಸಂಜೀವನಾದಿಗಳಿಗೆ ನಾಯಕನಾಗಿಯೂ, ನೂರು ಮಂದಿ ಸುರವೈದ್ಯರಿಂದ ಅನುಸರಿಸಲ್ಪಟ್ಟವನಾಗಿಯೂ ಸಾಕ್ಷಾತ್ ಶಂಕರನ ಶಿರೋಭೂಷಣನಾಗಿಯೂ ಇರುವ ಚಂದ್ರನನ್ನು ಕೂಡಾ ಕ್ಷಯರೋಗವು ಬಿಡುವುದಿಲ್ಲ. ಆದುದರಿಂದ ದೈವಯೋಗವನ್ನು ದಾಟುವುದು ಯಾರಿಗೂ ಅಸಾಧ್ಯ.

ಶ್ಲೋ: ಪ್ರಿಯಸಖ ವಿಪದ್ದಂಡಾಘಾತ ಪ್ರವಾತಪರಂ ಪರಾಪರಿಚಯ ಬಲೇ ಚಿಂತಾ ಚಕ್ರೇ ವಿಧಾಯ ವಿಧಿಖಲಃ । ಮೃದಮಿವ ಬಲಾತ್ ಪಿಂಡೀಕೃತ್ಯಪ್ರಗಲ್ಭ ಕುಲಾಲವತ್ ಭ್ರಮಯತಿ ಮನೋನೋ ಜಾನೀಮಃ ಕಿಮತ್ರವಿಧಾಸ್ಯತಿ ॥ ೮೮ ॥

ತಾ: ಎಲೇ ಮಿತ್ರನೇ, ನೀಚನಾದ ಈ ವಿಧಿಯು ಜಾಣರಾದ ಕುಂಬಾರರಂತೆ ಮನಸ್ಸನ್ನು ಮಣ್ಣಿನಂತೆ ಉಂಡೆಯಾಗಿ ಮಾಡಿ ಕಟ್ಟಿಗೆಯ ಪೆಟ್ಟಿನಂತಿರುವ ಆಪತ್ತುಗಳ ದೊಡ್ಡ ಗಾಳಿಯ ಪರಸ್ಪರ ಸನ್ನಿವೇಶದಿಂದ ಉಂಟಾದ ಸುಳಿಯಂತಿರುವ ಚಿಂತೆಯೆಂಬ ಚಕ್ರದಲ್ಲಿಟ್ಟು ತಿರುಗಿಸುತ್ತಾನೆ. ಈ ಮನಸ್ಸನ್ನು ತಿರುಗಿಸುವ ವಿಧಿಯು ಮುಂದೇನು ಮಾಡುವನೋ ನಾವರಿಯೆವು.

ಶ್ಲೋ: ವಿರಮವಿರಮಾಯಾ ತಾದಸ್ಮಾದ್ದುರದ್ಧ್ಯವಸಾಯತೋ ವಿಪದಿಮಹತಾಂ ಧೈರ್ಯಧ್ವಂಸಂ ಯ ದೀಕ್ಷಿತುಮೀಹಸೇ । ಅಯಿ ಜಡವಿಧೇ ಕಲ್ಪಾಪಾಯೇಽಪ್ಯ ಪೇತನಿಜಕ್ರಮಾಃ ಕುಲಶಿಖರಿಣಃ ಕ್ಷುದ್ರಾನೈತೇ ನವಾ ಜಲರಾಶಯಃ ॥ ೮೯ ॥

ತಾ: ಎಲೈ ಮಂದಮತಿಯಾದ ದೈವವೇ, ವಿಪತ್ಕಾಲದಲ್ಲಿ ಮಹಾತ್ಮರಿಗೆ ಧೈರ್ಯಧ್ವಂಸವು ಉಂಟಾಗುವದೆಂದು ನೀನು ಕೋರುವ ಕೋರಿಕೆಯ ದುರುದ್ಯೋಗವನ್ನು ಮಾಡದೆ ನಿಲ್ಲು! ಯಾಕೆಂದರೆ ಪ್ರಳಯಕಾಲದಲ್ಲೂ ಕೂಡಾ ಕುಲಪರ್ವತಗಳು, ಸಮುದ್ರಗಳು ಕ್ಷುದ್ರರಂತೆ ಮೇರೆ ತಪ್ಪಲಾರವು. ಅಂತೇ ಮಹನೀಯರಿಗೂ ಕೂಡಾ ವಿಪತ್ಕಾಲದಲ್ಲಿ ಧೈರ್ಯ ಉಪಯರ್ಯಯು ಉಂಟಾಗದು.

ಶ್ಲೋ: ದೈವೇನಪ್ರಭುಣಾಸ್ವಯಂ ಜಗತಿ ಯದ್ಯಸ್ಯ ಪ್ರಮಾಣೀಕೃತಂ।
ತತ್ತಸ್ಯೋಪನ ಮೇನ್ಮನಾಗಪಿ ಮಹಾನ್ನೈವಾಶ್ರಯಃ ಕಾರಣಂ ।
ಸರ್ವಾಶಾ ಪರಿಪೂರಕೇ ಜಲಧರೇ ವರ್ಷತ್ಯಪಿಪ್ರತ್ಯಹಂ ಸೂಕ್ಷ್ಮಾಏವಪತಂತಿ
ಚಾತಕಮುಖೇ ದ್ವಿತ್ರಾಃಪಯೋ ಬಿಂದವಃ ॥ ೯೦ ॥

ತಾ: ಸಮರ್ಥನಾದ ವಿಧಿಯು ಲೋಕದಲ್ಲಿ ಯಾವ ಪ್ರಾಣಿಗೆ ಎಷ್ಟು ಪದಾರ್ಥವನ್ನು ನಿಶ್ಚಯಿಸಿ ಸೃಷ್ಟಿಸಿರುವನೋ ಆ ಪ್ರಾಣಿಗೆ ■ ವಸ್ತುವು ಅಷ್ಟೇ ದೊರೆಯುವುದಲ್ಲದೆ ಆಶ್ರಯಬಲದಿಂದ ಹೆಚ್ಚು ಯಾ ಕಡಿಮೆ ದೊರೆಯಲಾರದು. ಸಮಸ್ತ ಜನರ ಮನೋರಥವನ್ನು ಪೂರೈಸಲು ಮೇಘವು ಮಳೆಗರೆದಾಗ್ಯೂ ಚಾತಕನ ಬಾಯಿಗೆ ಕೇವಲ ಎರಡು ಮೂರು ತೊಟ್ಟು ನೀರು ಬೀಳುವುದು. ಅದಕಾರಣ ಸಮಸ್ತರೂ ತಮ್ಮ ತಮ್ಮ ಪಾಲಿನ ಪಂಚಾಮೃತದಿಂದಲೇ ತೃಪ್ತಿಪಡೆಯಬೇಕೆಂದು ಭಾವವು.

## ಕರ್ಮ ಪದ್ಧತಿ

ಶ್ಲೋ: ನಮಸಾಮ್ಯೋ ದೇವಾನ್ನ ನುಹತ ವಿಧೇಃ ತೇಪಿ ವಶಗಾ ವಿಧಿರ್ವಂದ್ಯಃ ಸೋಪಿ ಪ್ರತಿನಿಯತಕರ್ಮೈಕಫಲದಃ ॥ ಫಲಂ ಕರ್ಮಾಯತ್ತಂ ಯದಿಕಿಮಮರೈಃ ಕಿಂ ಚ ವಿಧಿನಾ ನಮಸ್ತತ್ ಕರ್ಮಭ್ಯೋ ವಿಧಿರಪಿ ನ ಯೇಭ್ಯಃ ಪ್ರಭವತಿ ॥ ೯೧ ॥

ತಾ: (ವಿಧಿಯೂ ಕರ್ಮಾಧೀನನು) ದೇವತೆಗಳನ್ನು ನಮಸ್ಕರಿಸುವೆನು. ಆ ದೇವತೆಗಳು ಕೂಡಾ ದುಷ್ಟನಾದ ಬ್ರಹ್ಮನ ಅಧೀನರು. ಆದರೆ, ಆ ವಿಧಿಯು ಕೂಡಾ ಅಸ್ವತಂತ್ರನು. ಸದಸತ್ಕರ್ಮಗಳಿಗೆ ಅನುಸಾರವಾಗಿಯೇ ಫಲವನ್ನು ಕೊಡಬೇಕಾಗುತ್ತದೆ. ಅಂತಹ ಸುಖದುಃಖಾದಿ ಫಲಗಳು

ಕರ್ಮದ (ಆಚರಣೆ)ಯ ಅಧೀನವಾದುದರಿಂದ ಇತರ ದೇವತೆಗಳಿಂದ ಯಾವ ಲಾಭವೂ ಇಲ್ಲ. ಆದುದರಿಂದ ಆ ಸತ್ಕರ್ಮಗಳಿಗೆ ನಮಸ್ಕಾರವು.

ಶ್ಲೋ: ಬ್ರಹ್ಮಾಯೇನ ಕುಲಾಲವನ್ನಿಯಮಿತೋ ಬ್ರಹ್ಮಾಂಡ ಭಾಂಡೋದರೇ ವಿಷ್ಣುರ್ಯೇನ ದಶಾವತಾರ ಗಹನೇ ಕ್ಷಿಪ್ತೋ ಮಹಾಸಂಕಟೇ। ರುದ್ರೋ ಯೇನ ಕಪಾಲಪಾಣಿ ಪುಟಕೇ ಭಿಕ್ಷಾಟನಂಸೇವತೇ ಸೂರ್ಯೋ ಭ್ರಾಮ್ಯತಿ ನಿತ್ಯಮೇವ ಗಗನೇ ತಸ್ಮೈ ನಮಃ ಕರ್ಮಣೇ ॥ ೯೨ ॥

ತಾ: ಯಾವ ಕರ್ತವ್ಯ (ಕರ್ಮ)ದ ಬಲದಿಂದ ಬ್ರಹ್ಮನು ಕುಂಬಾರನಂತೆ ಸೃಷ್ಟಿಕಾರ್ಯದಲ್ಲಿ ತೊಡಗಿರುವನೋ, ವಿಷ್ಣುವು ಮತ್ಸ್ಯಾದಿ ದಶಾವತಾರವನ್ನು ತಳೆಯಬೇಕಾಗಿ ಬಂತೋ, ಶಿವನು ಕೈಯಲ್ಲಿ ಬ್ರಹ್ಮಕಪಾಲವನ್ನು ಹಿಡಿದು ಭಿಕ್ಷಾಟನೆ ಮಾಡಿ ತಿನ್ನಬೇಕಾಯಿತೋ, ಸೂರ್ಯನು ದಿನನಿತ್ಯ ಆಕಾಶದಲ್ಲಿ ತಿರುಗುತ್ತಿರುವನೋ ಅಂಥ ಮಹತ್ತರವಾದ ಕರ್ತವ್ಯಕ್ಕೇ ನಮಸ್ಕಾರವು ಸಲ್ಲತಕ್ಕದ್ದು.

ಶ್ಲೋ: ಯಾಸಾಧೂಂಶ್ಚ ಖಲಾನ್ ಕರೋತಿವಿದುಷೋ ಮೂರ್ಖಾನ್ ಹಿತಾನ್ ದ್ವೇಷಿಣಃ। ಪ್ರತ್ಯಕ್ಷಂ ಕುರುತೇ ಪರೋಕ್ಷಮಮೃತಂ ಹಾಲಾಹಲಂ ತತ್ ಕ್ಷಣಾತ್ ॥ ತಾಮಾರಾಧಯ ಸತ್ಕ್ರಿಯಾಂ ಭಗವತೀಂ ಭೋಕ್ತುಂ ಫಲಂವಾಂಛಿತಂ ಭೋಸಾಧೋವ್ಯಸನೈಃ ಗುಣೇಷು ವಿಪುಲೇಷ್ವಾಸ್ಥಾಂ ವೃಥಾಂ ಮಾಕೃಥಾ ॥ ೯೩ ॥

ತಾ: ಯಾವ ಸತ್ಕರ್ಮವು ದುರ್ಜನರನ್ನು ಸಾಧುಗಳನ್ನಾಗಿ ಮಾಡುವುದೋ, ಮೂರ್ಖರನ್ನು ವಿದ್ವಾಂಸರನ್ನಾಗಿಸುವುದೋ, ಶತ್ರುಗಳನ್ನು ಮಿತ್ರರನ್ನಾಗಿಸುವುದೋ, ಕಣ್ಣಿಗೆ ಕಾಣದಿರುವುದನ್ನು ಪ್ರತ್ಯಕ್ಷವಾಗಿಸುವುದೋ, ವಿಷವನ್ನು ನಿಮಿಷಮಾತ್ರದಲ್ಲಿ ಅಮೃತವಾಗಿಸುವುದೋ, ಅಂಥ ಸತ್ಕರ್ಮವನ್ನು ಇಷ್ಟವಾದ ಸುಖವನ್ನು ಅನುಭವಿಸುವುದಕ್ಕಾಗಿ ಸೇವಿಸಿ. ದುಃಖಕಾರಣಗಳಾದ ಸತ್ವ, ರಜ, ತಮಾದಿ ಗುಣಗಳನ್ನು ಆಶ್ರಯಿಸಬೇಡಿರಿ.

ಶ್ಲೋ: ಶುಭ್ರಂಸದ್ಮಸವಿಭ್ರಮಾ ಯುವತಯಃ ಶ್ವೇತಾತಪತ್ರೋಜ್ವಲಾ ಲಕ್ಷ್ಮೀರಿತ್ಯನುಭೂಯತೆ ಚಿರಮನುಸ್ಯೂತೇ ಶುಭೇಕರ್ಮಣಿ ।

ವಿಚ್ಛಿನ್ನೇ ನಿತರಾಮನಂಗಕಲಹ ಕ್ರೀಡಾತ್ರುಟತ್ತಂತುಕಂ ಮುಕ್ತಾ ಜಾಲ ಮಿವ ಪ್ರಾಯಾತಿ ಝುಡಿತಿ ಭ್ರಶ್ಯದ್ದಿಶೋದೃಶ್ಯತಾಂ ॥ ೯೪ ॥

ತಾ: ಜನ್ಮಾಂತರದಲ್ಲಿ ಆಚರಿಸಿದ ಸುಕೃತಫಲವು ಇರುವ ವರೆಗೆ ರಾಜಮಂದಿರಕ್ಕೆ ಸಮಾನವಾದ ಮನೆಯೂ, ನಾನಾವಿಧವಾದ ಸುಖಭೋಗ ಸಂಪತ್ತುಗಳೂ, ಶ್ವೇತಛತ್ರ ಮೊದಲಾದ ರಾಜಭೋಗಗಳೂ ಇರುವವು. ಸತ್ಕರ್ಮವು ನಾಶವಾಗಲು ಒಡನೇ ರತಿಕಾಲದಲ್ಲಿ ಹರಿದ ಮುತ್ತಿನಮಾಲೆಯು ಮುತ್ತು ನಾಲ್ಕು ದೆಸೆಗೂ ಚೆಲ್ಲಿಹೋಗುವಂತೆ ಸುಖಸಂಪತ್ತುಗಳೆಲ್ಲವೂ ಚಲ್ಲಾಪಿಲ್ಲಿಯಾಗುವವು.

ಶ್ಲೋ: ಗುಣವದಗುಣವದ್ವಾಕುರ್ವತಾ ಕಾರ್ಯಜಾತಂ ಪರಿಣತಿರವಧಾರ್ಯಾ ಯತ್ನತಃ ಪಂಡಿತೇನ । ಅತಿ ರಭಸಕೃತಾನಾಂ ಕರ್ಮಣಾಮಾವಿಪತ್ತೇಃ ಭವತಿ ಹೃದಯದಾಹೀ ಶಲ್ಯತುಲ್ಯೋವಿಪಾಕಃ ॥ ೯೫ ॥

ತಾ: ವಿವೇಕಶಾಲಿಯಾದ ಪುರುಷನು ತಾನು ಮಾಡುವ ಕಾರ್ಯವು ಸುಗುಣಪೂರಿತವಾಗಲಿ, ದುರ್ಗುಣಪೂರಿತವಾಗಲಿ, ಪ್ರಯತ್ನೇನ ಅದರ ಫಲ ಪರಿಣಾಮವನ್ನರಿತು ಆರಂಭಿಸಬೇಕು. ಹಾಗಲ್ಲದೆ ಆತುರಪಟ್ಟು ಅನಾಲೋಚನೆಯಿಂದ ಕಾರ್ಯವನ್ನು ಆರಂಭಿಸಿದರೆ ಅದು ಏನಾದರೂ ಆಗಿ ಪರಿಣಮಿಸುವ ವರೆಗೂ ಕಳಕಳಿ ಉಂಟಾಗುವುದು.

ಶ್ಲೋ: ಸ್ಥಾಲ್ಯಾಂ ವೈಢೂರ್ಯ ಮಯ್ಯಾಂ ಪಚತಿ ತಿಲಖಲಂ ಚಾಂದನೈಃ ಇಂಧನಾಘ್ಯೈಃ ಸಾವರ್ಣೈಃ ಲಾಂಗಲಾಗ್ರ್ಯೈಃ ವಿಲಿಖತಿ ವಸುಧಾ ಮರ್ಕತೂಲಸ್ಯ ಹೇತೋಃ । ಛಿತ್ವಾಕರ್ಪೂರಖಂಡಾನ್ ವೃತಿಮಿಹ ಕುರುತೇ ಕೋದ್ರವಾಣಾಂ ಸಮಂತಾತ್ ಪ್ರಾಪ್ಯೇಮಾಂಕರ್ಮ ಭೂಮಿಂ ನ ಭಜತಿ ಮನುಜೋಯಸ್ತಪೋ ಮಂದಭಾಗ್ಯಃ ॥ ೯೬ ॥

ತಾ: ರತ್ನಖಚಿತವಾದ ಪಾತ್ರೆಯಲ್ಲಿ ಎಳ್ಳಿನ ಹಿಂಡಿಯನ್ನು ಹಾಕಿ ಚಂದನಾದಿ ಕಟ್ಟಿಗೆಗಳಿಂದ ಅದನ್ನು ಬೇಯಿಸುವವನೂ, ಎಕ್ಕದ ಹತ್ತಿಯನ್ನು ಬೆಳೆಯಲು ಬಂಗಾರದ ನೇಗಿಲಿನಿಂದ ನೆಲ ಉಳುವವನೂ, ಕರ್ಪೂರವನ್ನು ಹುಡಿಮಾಡಿ ಹಾರಕವೆಂಬ ಧಾನ್ಯದ ಗದ್ದೆಗೆ ಪಾತಿಕಟ್ಟುವವನೂ, ಎಷ್ಟು ನಿರ್ಭಾಗ್ಯರಲ್ಲಿ ಅಗ್ರಗಣ್ಯನೋ, ಅಷ್ಟೇ ನಿರ್ಭಾಗ್ಯನು ಈ

ಸತ್ಕರ್ಮಾನುಷ್ಠಾನಕ್ಕೆ ಸಾಧನವಾದ ಜಗತ್ತಿನಲ್ಲಿ ಹುಟ್ಟಿ ಸತ್ಕರ್ಮಾಚರಣೆ ಮಾಡಿರುವವನು ಆಗಿರುತ್ತಾನೆ.

ಶ್ಲೋ: ನೈವಾಕೃತಿಃ ಫಲತಿ ನೈವಕುಲಂ ನ ಶೀಲಂ ವಿದ್ಯಾಪಿ ನೈವ ನ ಚ ಯತ್ನಕೃತಾಪಿ ಸೇವಾ ॥ ಭಾಗ್ಯಾನಿ ಪೂರ್ವತಪಸಾಖಲುಸಚಿತಾನಿ ಕಾಲೇ ಫಲಂತಿ ಪುರುಷಸ್ಯ ಯಥೇವವೃಕ್ಷಾಃ ॥ ೯೮ ॥

ತಾ: ಮನುಷ್ಯನ ಸುಂದರ ಆಕಾರವು ಫಲಕಾರಿಯಾಗದು, ಕುಲವೂ ಪ್ರಯೋಜನಕಾರಿಯಲ್ಲ, ಒಳ್ಳೆಯ ನಡತೆಯೂ ವಿದ್ಯೆಯೂ ಫಲವನ್ನು ಮಾಡದು. ಅತಿ ಯತ್ನದಿಂದ ಮಾಡಿದ ಪರೋಪಕಾರವೂ ಪ್ರಯೋಜನ ಕಾರಿಯಲ್ಲ. ಪ್ರಯೋಜನಕಾರಿಯೆಂದರೆ ತಾನು ಜನ್ಮಾಂತರದಲ್ಲಿ ಆರ್ಜಿಸಿರುವ ಸುಕೃತಫಲವು ಮಾತ್ರ. ಅದೊಂದೇ, ಕಾಲಕ್ಕೆ ಸರಿಯಾಗಿ ವೃಕ್ಷವು ಫಲಿಸುವಂತೆ ಫಲಕೊಡುವುದು.

ಶ್ಲೋ: ಮಜ್ಜತ್ವಂಭಸಿಯಾತು ಮೇರುಶಿಖರಂ ಶತ್ರೂನ್ ಜಯತ್ವಾಹವೇ ವಾಣಿಜ್ಯಂ ಕೃಷಿ ಸೇವನಾದಿ ಸಕಲಾ ವಿದ್ಯಾಃ ಕಲಾಃ ಶಿಕ್ಷತು । ಆಕಾಶಂ ವಿಪುಲಂ ಪ್ರಯಾತು ಖಗವತ್ ಕೃತ್ವಾ ಪ್ರಯತ್ನಂ ಪರಂ ನಾಭಾವ್ಯಂ ಭವತೀಹ ಕರ್ಮವಶತೋ ಭಾವ್ಯಸ್ಯ ನಾಶಃ ಕುತಃ ॥ ೯೮ ॥

ತಾ: ನೀರಿನೊಳಗೆ ಮುಳುಗಿ ಕುಳಿತುಕೊಂಡರೂ, ಎತ್ತರದ ಪರ್ವತಗಳನ್ನು ಸಾಹಸದಿಂದ ಹತ್ತಿಳಿದರೂ, ಅದೇನೂ ಆಶ್ಚರ್ಯಕರವಾದ ಕೆಲಸವಲ್ಲ. ಶತ್ರುಗಳನ್ನು ಯುದ್ಧದಲ್ಲಿ ಉಪಾಯಗಳಿಂದ ಗೆದ್ದರೂ, ಕ್ರಯ ವಿಕ್ರಯ, ವ್ಯಾಪಾರ, ಪರಸೇವೆ, ಸದ್ವಿದ್ಯೆ ಮೊದಲಾದುವುಗಳಲ್ಲಿ ಕುಶಲತೆಯನ್ನು ಪಡೆದರೂ, ಅವೆಲ್ಲಾ ಮಹತ್ಕಾರ್ಯಗಳಲ್ಲ. ಪಕ್ಷಿಯಂತೆ ಅಂತರಿಕ್ಷದಲ್ಲಿ ಚಲಿಸಿದರೂ, ಅದೇನೂ ಅಚ್ಚರಿಯಾಗದು. ಏಕೆಂದರೆ ಆ ಕೆಲಸಗಳೆಲ್ಲಾ ಆಗತಕ್ಕದ್ದೇ. ಆದುದರಿಂದ ಆಗಲಾರದ್ದು ಎಂದೂ ಆಗದು. ಆಗುವ ಕಾರ್ಯಗಳೆಲ್ಲವೂ ಕರ್ಮದ ಬಲದಿಂದಲೇ ಆಗುತ್ತವೆ.

ಶ್ಲೋ: ವನೇ ರಣೇ ಶತ್ರು ಜಲಾಗ್ನಿಮಧ್ಯೇ ಮಹಾರ್ಣವೇ ಪರ್ವತ ಮಸ್ತಕೇವಾ । ಸುಪ್ತಂಪ್ರಮತ್ತಂ ವಿಷಮಸ್ಥಿತಂವಾ ರಕ್ಷಂತಿ ಪುಣ್ಯಾನಿಪುರಾಕೃತಾನಿ ॥ ೯೯ ॥

ತಾ: ಕಾಡಿನಲ್ಲಿ, ಯುದ್ಧದಲ್ಲಿ, ಶತ್ರುಮಧ್ಯದಲ್ಲಿ, ಮತ್ತು ಜಲಮಧ್ಯದಲ್ಲಿ, ಮಹಾಸಮುದ್ರ ಮಧ್ಯದಲ್ಲಿ, ಪರ್ವತ ಶಿಖರದಲ್ಲಿ ಇರುವವನನ್ನೂ, ಮತ್ತನಾಗಿರುವವನನ್ನೂ, ಬಹು ಸಂಕಟದಲ್ಲಿರುವವನನ್ನೂ, ಅವನವನ ಪೂರ್ವಜನ್ಮದ ಸುಕೃತವೇ ಪರಿಪಾಲಿಸುವುದಲ್ಲದೆ, ಪುರುಷ ಪ್ರಯತ್ನಗಳು ರಕ್ಷಿಸಲಾರವು.

ಶ್ಲೋ: ಭೀಮಂ ವನಂ ಭವತಿತಸ್ಯಪುರಂ ಪ್ರಧಾನಂ ಸರ್ವೋ ಜನಃ ಸ್ವಜನತಾಮುಪಯಾತಿತಸ್ಯ । ಕೃತ್ಸ್ನಾ ಚ ಭೂಃ ಭವತಿ ಸನ್ನಿಧಿ ರತ್ನ ಪೂರ್ಣಾಯಸ್ಯಾಸ್ತಿ ಪೂರ್ವ ಸುಕೃತಂ ವಿಪುಲಂ ನರಸ್ಯ ॥ ೧೦೦ ॥

ತಾ: ಯಾವ ಮನುಷ್ಯನಿಗೆ ಅಖಂಡ ಪೂರ್ವಜನ್ಮಾರ್ಜಿತ ಸುಖವಿರುವುದೋ ಅತನಿಗೆ ಭಯಂಕರವಾದ ಕಾಡು ರಾಜಧಾನಿಯಾಗುವುದು, ಇತರ ಜನರೂ ಬಂಧುಗಳಾಗುವರು, ಎಲ್ಲಾ ಜಾಗವೂ ರತ್ನನಿಧಿಯಿಂದ ಕೂಡಿದ್ದಾಗಿರುವುದು.

ಸಂಪೂರ್ಣ.

'ಒಂದಾಣೆಮಾಲೆ'ಯಲ್ಲಿ

**ಮೂವತ್ತಕ್ಕಿಂತ ಹೆಚ್ಚು ಏಕಾಂಕ ನಾಟಕಗಳು ಪ್ರಕಟವಾಗಿವೆ.**

ನೀತಿಪರ ಕಥಾ ಸಂಕಲನಗಳಿವೆ.

ವಿನೋದ ಕಥೆಗಳಿವೆ.

ಊರ ಔಷಧಗಳ ಪುಸ್ತಕಗಳಿವೆ.

ಟಿಶ್ಯೂ ಮತ್ತು ಹೋಮಿಯೋಪಥಿ ಚಿಕಿತ್ಸಾಸಾರ ಇವೆ.

ಸುಭಾಷಿತ, ಗುಮಾನಿ ಕವಿಯ ನೀತಿಶತಕ, ಚಾಣಕ್ಯಶತಕ, ಭರ್ತೃಹರಿಯ ನೀತಿಶತಕ, ಭಕ್ತವಾಣಿ, ವಿವೇಕಾನಂದವಾಣಿ ಮೊದಲಾದುವು ಪ್ರಕಟವಾಗಿವೆ.

**ಪ್ರತೀ ವಾರ ಒಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.**

ಒಂದಾಣೆಮಾಲೆ,

ಪ್ರಭಾತ ಆಫೀಸು, ಮಂಗಳೂರು-1.